# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1933 (2329)

ಸದಸ್ಯರ ಹೆಸರು : ಶ್ರೀ ಕೆ.ಹರೀಶ್ ಕುಮಾರ್,(ವಿಧಾನ ಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 21.03.2022

ಉತ್ತರಿಸಬೇಕಾದ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಪ್ರಶ್ನೆ | ಉತ್ತರ |
|---|---|
| **ಅ)** ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಬೆಟ್ಟದಕೂರ್ಲಿ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಅದೇ ಊರಿನ ನಿವಾಸಿಯಾದ ದಿ: ಹನುಮಂತಮ್ಮ ಹಾಗೂ ದಿ:ಕನ್ನಪ್ಪ ಇವರುಗಳು ಜಮೀನನ್ನು ಶಾಲೆಗೆ ದಾನ ಮಾಡಿರುವುದು ನಿಜವೇ; ಹಾಗಿದ್ದಲ್ಲಿ, ಸದರಿ ಜಮೀನಿನ ಖಾತೆಯನ್ನು ಸದರಿ ಸರ್ಕಾರಿ ಶಾಲೆಯ ಹೆಸರಿಗೆ ವರ್ಗಾಯಿಸಲಾಗಿದೆಯೇ;<br>ಇಲ್ಲದಿದ್ದಲ್ಲಿ, ಕಾರಣವೇನು; | ಶಿವಮೊಗ್ಗ ಜಿಲ್ಲೆಯ, ಸೊರಬ ತಾಲ್ಲೂಕು, ಗೆಂಡ್ಲ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿನ ಬೆಟ್ಟದಕೂರ್ಲಿ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ದಿ:ಹನುಮಂತಮ್ಮ ಹಾಗೂ ದಿ:ಕನ್ನಪ್ಪ ಇವರುಗಳು 19,306 ಚ.ಅಡಿ ಜಮೀನನ್ನು ಭೂ ದಾನವಾಗಿ ನೀಡಿರುತ್ತಾರೆ.<br>ಗ್ರಾಮ ಪಂಚಾಯಿತಿ ದಾಖಲೆಗಳ ಅನುಸಾರ ಸದರಿ ಜಮೀನು ಸದರಿ ಶಾಲೆಯ ಹೆಸರಿನಲ್ಲಿರುತ್ತದೆ. |
| **ಆ)** ಯಾವ ಕಾಲಮಿತಿಯೊಳಗೆ ಸದರಿ ಶಾಲೆಯ ಹೆಸರಿಗೆ ಖಾತೆ ವರ್ಗಾವಣೆ ಮಾಡಲಾಗುವುದು; (ಸಂಪೂರ್ಣ ವಿವರ ನೀಡುವುದು) | ಗ್ರಾಮ ಪಂಚಾಯಿತಿ ದಾಖಲೆಗಳ ಅನುಸಾರ ಸದರಿ ಜಮೀನು ಸದರಿ ಶಾಲೆಯ ಹೆಸರಿನಲ್ಲಿರುತ್ತದೆ. |
| **ಇ)** ಶಾಲಾ ಅಭಿವೃದ್ಧಿಗೆ ಅಮೂಲ್ಯವಾದ ಜಮೀನನ್ನು ದಾನ ಮಾಡಿರುವ ದಾನಿಗಳ ಹೆಸರನ್ನು ಸದರಿ ಶಾಲೆಗೆ ಇಡಲು ಸರ್ಕಾರ ಕ್ರಮ ಕೈಗೊಳ್ಳುವುದೆ? | ಸದರಿ ಜಮೀನಿನ ದಾನಿಗಳ ಹೆಸರನ್ನು ಸದರಿ ಶಾಲೆಗೆ ನಾಮಕರಣ ಮಾಡಲು ಉಪ ನಿರ್ದೇಶಕರು (ಆಡಳಿತ), ಸಾ.ಶಿ.ಇ., ಶಿವಮೊಗ್ಗ ಜಿಲ್ಲೆ ಇವರಿಂದ ಪ್ರಸ್ತಾವನೆ ಸ್ವೀಕೃತಿಗೊಂಡಲ್ಲಿ ನಿಯಮಾನುಸಾರ ಪರಿಶೀಲಿಸಿ ಸೂಕ್ತ ಕ್ರಮವಹಿಸಲಾಗುವುದು. |

ಇಪಿ 82 ಪಿಎಂಸಿ 2022

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು.